# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **1594**
**ಸದಸ್ಯರ ಹೆಸರು** : ಶ್ರೀ ಕೆ.ಎ.ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)
**ಉತ್ತರಿಸಬೇಕಾದ ದಿನಾಂಕ** : 18.03.2021
**ಉತ್ತರಿಸುವ ಸಚಿವರು** ಮುಖ್ಯಮಂತ್ರಿಗಳು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಕೇಂದ್ರ ಸರ್ಕಾರದ ನೂತನ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯ 2018ನೇ ಇಸವಿಯಲ್ಲಿ ಹೊರಡಿಸಿದ ವಾಯು-ಸೌರಶಕ್ತಿಮಾನ್ ನೀತಿ (Wind –Solar Hybrid Policy) ಯಂತೆ ಲಭ್ಯವಿರುವ ವಿದ್ಯುತ್ ಪ್ರಸರಣ ವ್ಯವಸ್ಥೆಯನ್ನು ಗರಿಷ್ಠವಾಗಿ ಬಳಸಿಕೊಳ್ಳಲು ನವೀಕರಿಸಬಹುದಾದ ವಿದ್ಯುಚ್ಛಕ್ತಿ ಉತ್ಪಾದನೆಯಲ್ಲಿ ಏರು-ಪೇರು ತಗ್ಗಿಸಲು ಮತ್ತು ಉತ್ತಮ ಗ್ರಿಡ್ ಸ್ಥಿರೀಕರಣ ಸಾಧಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳು ಯಾವುವು: (ಸಂಪೂರ್ಣ ಮಾಹಿತಿ ನೀಡುವುದು) | ವಿದ್ಯುತ್ ಪ್ರಸರಣ ವ್ಯವಸ್ಥೆಯನ್ನು ಗರಿಷ್ಠವಾಗಿ ಬಳಸಿಕೊಳ್ಳಲು ನವೀಕರಿಸಬಹುದಾದ ವಿದ್ಯುಚ್ಛಕ್ತಿ ಉತ್ಪಾದನೆಯಲ್ಲಿ ಏರು-ಪೇರು ತಗ್ಗಿಸಲು ಮತ್ತು ಉತ್ತಮ ಗ್ರಿಡ್ ಸ್ಥಿರೀಕರಣ ಸಾಧಿಸಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಕೈಗೊಂಡಿರುವ ಕ್ರಮಗಳ ವಿವರಗಳು ಕೆಳಕಂಡಂತಿವೆ:<br><br>1. ಜರ್ಮನ್ ಇಂಟರ್‌ನ್ಯಾಷನಲ್ ಡೆವೆಲಪ್‌ಮೆಂಟ್ ಕೋ-ಆಪರೇಷನ್ (GIZ) ಕಾರ್ಯಕ್ರಮದ ಭಾಗವಾಗಿ SLDC KPTCL ಬೆಂಗಳೂರಿನಲ್ಲಿ M/s. PGCILರವರ ಸಹಯೋಗದೊಂದಿಗೆ ನವೀಕರಿಸುವ ಇಂಧನ ಮೂಲದ ನಿರ್ವಹಣಾ ಕೇಂದ್ರ (REMC) ಸ್ಥಾಪಿಸಲಾಗಿದ್ದು, ದಿನಾಂಕ14.02.2020 ರಂದು ಕಾರ್ಯಗತಗೊಳಿಸಲಾಗಿದೆ.<br>2. ನವೀಕರಿಸಬಹುದಾದ ವಿದ್ಯುತ್ ಲಭ್ಯತೆಯ ಮುನ್ಸೂಚನಾ ಮಾಹಿತಿಯನ್ನು ರಾಜ್ಯ ವಿದ್ಯುತ್ ರವಾನೆ ಕೇಂದ್ರ ಪಡೆಯುವುದರಿಂದ ಅವುಗಳನ್ನು ಪರಿಣಾಮಕಾರಿಯಾಗಿ ಬಳಸಲು ಶಾಖೋತ್ಪನ್ನ ಮತ್ತು ಜಲ ವಿದ್ಯುತ್ ಸ್ಥಾವರಗಳನ್ನು ನಿಯಂತ್ರಿಸಲಾಗುತ್ತದೆ.<br>3. ನವೀಕರಿಸುವ ಇಂಧನ ಮೂಲದ ನಿರ್ವಹಣಾ ಕೇಂದ್ರವನ್ನು (REMC) ಸ್ಕಾಡದೊಂದಿಗೆ ಜೋಡಣೆ ಮಾಡಿರುವುದರಿಂದ ನವೀಕರಿಸಬಹುದಾದ ವಿದ್ಯುತ್ ಉತ್ಪಾದನೆ ಮತ್ತು ಬಳಕೆಯನ್ನು ಎಸ್.ಎಲ್.ಡಿ.ಸಿ.ಯಲ್ಲಿ ನೈಜ ಸಮಯದೊಂದಿಗೆ ಸಂಯೋಜನೆ ಮಾಡಬಹುದಾಗಿದೆ.<br>4. ನೀರಾವರಿ ಪಂಪ್‌ಸೆಟ್‌ಗಳ ವಿದ್ಯುತ್ ಲೋಡನ್ನು ಹಗಲು ಸಮಯಕ್ಕೆ ಬದಲಾಯಿಸಿರುವುದರಿಂದ ಸೋಲಾರ್ ವಿದ್ಯುತ್ತನ್ನು ಪರಿಣಾಮಕಾರಿಯಾಗಿ ಬಳಸಲಾಗುತ್ತಿದೆ.<br>5. ನವೀಕರಿಸಬಹುದಾದ ವಿದ್ಯುತ್ ಲಭ್ಯತೆಯ ಸಮಯದಲ್ಲಿ ಥರ್ಮಲ್ ವಿದ್ಯುತ್ತನ್ನು ಹಿಂಪಡೆಯಲಾಗುತ್ತದೆ. |

<table>
<tr>
<td>ಆ)</td>
<td>ಕೇಂದ್ರ ಸರ್ಕಾರ ಮಾರ್ಚ್, 2019 ರಲ್ಲಿ ಹೊರಡಿಸಿರುವ ಸೂಚನೆಯಂತೆ 25 ಮೆಗಾವ್ಯಾಟ್‌ಗಳಿಗಿಂತ ಹೆಚ್ಚಾಗಿರುವ ಜಲ-ವಿದ್ಯುತ್ ಯೋಜನೆಗಳನ್ನು ನವೀಕರಿಸಬಹುದಾದ ಇಂಧನಗಳೆಂದು ಘೋಷಿಸಿರುವುದು ನಿಜವೇ; ಹಾಗಿದ್ದಲ್ಲಿ, ಈ ಯೋಜನೆ ಅಡಿಯಲ್ಲಿ ರಾಜ್ಯದಲ್ಲಿ ಎಷ್ಟು ಜಲ-ವಿದ್ಯುತ್ ಯೋಜನೆಗಳನ್ನು ಗುರುತಿಸಲಾಗಿದೆ: (ಸಂಪೂರ್ಣ ಮಾಹಿತಿ ನೀಡುವುದು)</td>
<td>ಕೇಂದ್ರ ಸರ್ಕಾರದ ಕಚೇರಿ ಜ್ಞಾಪನ ಪತ್ರ ಸಂಖ್ಯೆ:F.No.15/2/2016-h-1 (Pt) ದಿನಾಂಕ 8 ನೇ ಮಾರ್ಚ್ 2019 ರಲ್ಲಿ 25 ಮೆಗಾವ್ಯಾಟ್‌ಗಳಿಗಿಂತ ಹೆಚ್ಚಾಗಿರುವ ಜಲ-ವಿದ್ಯುತ್ ಯೋಜನೆಗಳನ್ನು ನವೀಕರಿಸಬಹುದಾದ ಇಂಧನ ಯೋಜನೆಗಳೆಂದು ಘೋಷಿಸಲಾಗಿದೆ.<br><br>ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಪ್ರಸ್ತುತ 25 ಮೆ.ವ್ಯಾ. ಗಿಂತ ಹೆಚ್ಚಿನ ಸಾಮರ್ಥ್ಯದ ಜಲ ವಿದ್ಯುತ್ ಕೇಂದ್ರಗಳ ವಿವರ ಈ ಕೆಳಕಂಡಂತಿದೆ:-<br><br>
<table>
<tr><th>ಕ್ರ ಸಂ</th><th>ವಿದ್ಯುದಾಗಾರಗಳು</th><th>ಉತ್ಪಾದನಾ ಸಾಮರ್ಥ್ಯ ಮೆ.ವ್ಯಾಗಳಲ್ಲಿ</th></tr>
<tr><td>1</td><td>ಶರಾವತಿ</td><td>1035</td></tr>
<tr><td>2</td><td>ಲಿಂಗನಮಕ್ಕಿ</td><td>55</td></tr>
<tr><td>3</td><td>ಬದ್ರಾ</td><td>39.20</td></tr>
<tr><td>4</td><td>ನಾಗಝರಿ</td><td>900</td></tr>
<tr><td>5</td><td>ಸೂಪ</td><td>100</td></tr>
<tr><td>6</td><td>ವರಾಹಿ</td><td>460</td></tr>
<tr><td>7</td><td>ಘಟಪ್ರಭಾ</td><td>32</td></tr>
<tr><td>8</td><td>ಕದ್ರಾ</td><td>150</td></tr>
<tr><td>9</td><td>ಕೊಡಸಳ್ಳಿ</td><td>120</td></tr>
<tr><td>10</td><td>ಗೇರುಸೊಪ್ಪ</td><td>240</td></tr>
<tr><td>11</td><td>ಆಲಮಟ್ಟಿ</td><td>290</td></tr>
<tr><td>12</td><td>ಶಿವನ ಸಮುದ್ರಂ</td><td>42</td></tr>
<tr><td>13</td><td>ಎಮ್‌ಜಿಹೆಚ್‌ಇ</td><td>139.20</td></tr>
<tr><td>14</td><td>ಮುನಿರಾಬಾದ್</td><td>38</td></tr>
</table>
</td>
</tr>
<tr>
<td>ಇ)</td>
<td>ವಾಯು-ಸೌರಶಕ್ತಿಮಾನ್ ವ್ಯವಸ್ಥೆಯನ್ನು ರೂಪಿಸಲು ಮತ್ತು ಜಲ-ವಿದ್ಯುತ್ ಯೋಜನೆಗಳನ್ನು ಉತ್ತೇಜನಗೊಳಿಸಲು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಮತ್ತು ರಾಜ್ಯ ಸರ್ಕಾರದ ಅಧೀನದಲ್ಲಿರುವ ಪ್ರಸರಣ ಮತ್ತು ವಿತರಣಾ ಸಂಸ್ಥೆಗಳಿಗೆ ಅನುದಾನ ನೀಡಿದೆಯೇ? (ಅನುದಾನ ಮತ್ತು ಅದರ ಬಳಕೆಯ ಪೂರ್ಣ ವಿವರ ನೀಡುವುದು)</td>
<td>ಕೇಂದ್ರ ಸರ್ಕಾರದ Green Energy Corridor ಫೇಸ್-1 ಅಡಿಯಲ್ಲಿ ರಾಜ್ಯದಲ್ಲಿ ಒಟ್ಟು 7 ಯೋಜನೆಗಳನ್ನು ಕೈಗೆತ್ತಿಕೊಂಡು ಅದರ ಅಂದಾಜು ವೆಚ್ಚ ರೂ.906 ಕೋಟಿಗಳಾಗಿರುತ್ತದೆ, ಕೇಂದ್ರ ಸರ್ಕಾರದ ಅನುದಾನದಿಂದ ಒಟ್ಟು ರೂ.362.40 ಕೋಟಿಗಳಲ್ಲಿ, ಇಲ್ಲಿಯವರೆಗೂ ರೂ.171.18 ಕೋಟಿಗಳ ಅನುದಾನ ಬಿಡುಗಡೆಯಾಗಿರುತ್ತದೆ. ಫೇಸ್-1 ಅಡಿಯಲ್ಲಿನ ಯೋಜನೆಗಳ ಪ್ರಸ್ತುತ ಹಂತದ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ.<br><br>ಕೇಂದ್ರ ಸರ್ಕಾರದಿಂದ ಪ್ರಾಯೋಜಿಸಲ್ಪಟ್ಟ Green Energy Corridor ಫೇಸ್-2 ಅಡಿಯಲ್ಲಿ 13 ಕಾಮಗಾರಿಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ ಹಾಗೂ ಕೇಂದ್ರ ಸರ್ಕಾರದ ಅನುಮೋದನೆ ಬಾಕಿ ಇದ್ದು, ಸದರಿ ಯೋಜನೆಯಡಿಯಲ್ಲಿ ಯಾವುದೇ ಅನುದಾನ ಬಿಡುಗಡೆಯಾಗಿರುವುದಿಲ್ಲ.</td>
</tr>
</table>

ಸಂಖ್ಯೆ: ಎನರ್ಜಿ 77 ಇಬಿಎಸ್ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಕೆ.ಎ.ತಿಪ್ಪೇಸ್ವಾಮಿ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1594ಕ್ಕೆ ಅನುಬಂಧ-**

**ಕರ್ನಾಟಕ ವಿದ್ಯುತ್ ಪರಸರಣ ನಿಗಮ ನಿಯಮಿತ ವತಿಯಿಂದ ಕೇಂದ್ರ ಸರ್ಕಾರದ Green Energy Corridorಫೇಸ್-1 ಅಡಿಯಲ್ಲಿ ರಾಜ್ಯದಲ್ಲಿ ಕೈಗೆತ್ತಿಕೊಳ್ಳಲಾಗಿರುವ ಯೋಜನೆಗಳ ವಿವರಗಳು**

| ಕ್ರ. ಸಂ. | ಯೋಜನೆಹೆಸರು | ಗುರಿ |
|---|---|---|
| 1 | ಶಿವನಸಮುದ್ರ: 2x100ಎಂ.ವಿ.ಎ220/66ಕೆ.ವಿ. ಮತ್ತು 1 x 8 ಎಂ.ವಿ.ಎ66/11ಕೆ.ವಿ. ವಿದ್ಯುತ್ ಉಪಕೇಂದ್ರ ಸ್ಥಾಪನೆ. ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ, | ಚಾಲನೆಗೊಳಿಸಲಾಗಿರುತ್ತದೆ |
| 2 | ಜಗಳೂರು: 2x500 ಎಂ.ವಿ.ಎ 400/220 ಕೆ.ವಿ. ಜಿಐಎಸ್ ಉಪಕೇಂದ್ರ ಸ್ಥಾಪನೆ ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ ಮತ್ತು ಅಧಿಕ 220 ಕೆ.ವಿ. ಡಿ.ಸಿ. ಲೈನ್ ಚಿತ್ರದುರ್ಗ | ಚಾಲನೆಗೊಳಿಸಲಾಗಿರುತ್ತದೆ |
| 3 | ಗದಗ (ದೋನಿ): 2x500 ಎಂ.ವಿ.ಎ400/220 ಕೆ.ವಿ. ಉಪಕೇಂದ್ರ ಸ್ಥಾಪನೆ, ಮುಂಡರಗಿ ತಾಲ್ಲೂಕು, ಗದಗ ಜಿಲ್ಲೆ. | ಚಾಲನೆಗೊಳಿಸಲಾಗಿರುತ್ತದೆ |
| 4 | 220ಕೆ.ವಿ. ಬಿಡ್ನಾಳ ಉಪಸ್ಥಾವರದಿಂದ 220 ಕೆ.ವಿ. 26 ಕಿ.ಮೀ ಜೋಡಿ ಮಾರ್ಗವನ್ನು LILO | ಚಾಲನೆಗೊಳಿಸಲಾಗಿರುತ್ತದೆ |
| 5 | ಹಿರಿಯೂರು ಚಿತ್ರದುರ್ಗ ಜೋಡಿ ಮಾರ್ಗ ನಿರ್ಮಾಣ | ಕಾಮಗಾರಿಗಳು ಪ್ರಗತಿಯಲ್ಲಿವೆ |
| 6 | ಹೊಸದುರ್ಗ: 2x100 ಎಂ.ವಿ.ಎ 220/66 ಕೆ.ವಿ. ಮತ್ತು 1x12.5 ಎಂ.ವಿ.ಎ 66/11 ಉಪಕೇಂದ್ರ ಸ್ಥಾಪನೆ ಹೊಸದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಮತ್ತು 220ಕೆ.ವಿ. ಜೋಡಿ ಮಾರ್ಗ 400/220 ಕೆ.ವಿ. ಜಗಳೂರು ವಿದ್ಯುತ್ ಉಪಕೇಂದ್ರ. | ಕಾಮಗಾರಿಗಳು ಪ್ರಗತಿಯಲ್ಲಿವೆ |
| 7 | ಮುಗಲ್‌ಕೋಡ್: 2x100 ಎಂ.ವಿ.ಎ 220/110 ಕೆ.ವಿ. ಮತ್ತು 2x100 ಎಂ.ವಿ.ಎ 110/11 ಕೆ.ವಿ. ಉಪಕೇಂದ್ರ ಸ್ಥಾಪನೆ ರಾಯಬಾಗ ತಾಲ್ಲೂಕು, ಬೆಳಗಾಂ ಜಿಲ್ಲೆ, 220 ಕೆ.ವಿ. ಜೋಡಿ ಮಾರ್ಗ LILO ಚಿಕ್ಕೋಡಿ-ಘಟಪ್ರಭ ಲೈನ್. | ಕಾಮಗಾರಿಗಳು ಪ್ರಗತಿಯಲ್ಲಿವೆ |